ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1512

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ಸಚಿವರು : ತೋಟಗಾರಿಕೆ ಹಾಗೂ ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 24.09.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ಎಷ್ಟು ಪ್ರದೇಶಗಳಲ್ಲಿ ಸಾವಯವ ಕೃಷಿ ಕೈಗೊಳ್ಳಲಾಗಿದೆ: | ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು 10,000 ಹೆಕ್ಟೇರ್ ಪ್ರದೇಶದಲ್ಲಿ ಸಾವಯವ ಕೃಷಿ ಕೈಗೊಳ್ಳುವ ಸಲುವಾಗಿ ತೋಟಗಾರಿಕೆ ಇಲಾಖೆ ವತಿಯಿಂದ ಕೇಂದ್ರ ಪುರಸ್ಕೃತ ಪರಂಪರಾಗತ ಕೃಷಿ ವಿಕಾಸ ಯೋಜನೆ (PKVY) ಯಡಿ 2020-21 ರಿಂದ 2022-23 ರವರೆಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ. |
| ಆ) | ಸಾವಯವ ಕೃಷಿ ಉತ್ತೇಜಿಸಲು ಇಲಾಖೆಯ ವತಿಯಿಂದ ನೀಡುತ್ತಿರುವ ಪ್ರೋತ್ಸಾಹವೇನು? (ವಿವರ ನೀಡುವುದು) | ಸಾವಯವ ಕೃಷಿ ಉತ್ತೇಜಿಸಲು ಇಲಾಖೆಯ ವತಿಯಿಂದ ನೀಡುತ್ತಿರುವ ಪ್ರೋತ್ಸಾಹದ ವಿವರ ಈ ಕೆಳಗಿನಂತಿದೆ.<br>1. ಯೋಜನೆಯಡಿ ಮೊದಲ, ಎರಡನೇ ಮತ್ತು ಮೂರನೇ ವರ್ಷದಲ್ಲಿ ಕ್ರಮವಾಗಿ ರೂ.16.50 ಕೋಟಿ, ರೂ.17 ಕೋಟಿ ಮತ್ತು ರೂ.16.50 ಕೋಟಿ ಒಟ್ಟು ರೂ.50.00 ಕೋಟಿ ಅನುದಾನವನ್ನು ಮೂರು ವರ್ಷಗಳ ಅವಧಿಗೆ ಹಂಚಿಕೆ ಮಾಡಲಾಗಿದೆ.<br>2. ರಾಜ್ಯದ 18 ಜಿಲ್ಲೆಗಳಲ್ಲಿ ಪ್ರತಿ ಜಿಲ್ಲೆಗೆ ತಲಾ ಒಂದರಂತೆ 18 ಗುಚ್ಛಗಳನ್ನು ಗುರುತಿಸಿ, ಅನುಷ್ಠಾನ ಪ್ರಕ್ರಿಯೆ ಪ್ರಾರಂಭಿಸಲಾಗಿರುತ್ತದೆ.<br>3. ಪ್ರತಿ ಹೆಕ್ಟೇರ್ ಗೆ ರೂ.50,000 ಘಟಕ ವೆಚ್ಚದಂತೆ 1, 2 ಮತ್ತು 3 ನೇ ವರ್ಷಗಳಲ್ಲಿ ಕ್ರಮವಾಗಿ ರೂ.16,500, 17,000 ಮತ್ತು 16,500 ಗಳನ್ನು ಭರಿಸಲಾಗುವುದು. ಇದರಲ್ಲಿ ರೈತರಿಗೆ ರೂ.31,000 ಗಳನ್ನು DBT ಮೂಲಕ ಸಹಾಯಧನ ನೀಡಲಾಗುವುದು. ಉಳಿದ ರೂ.19,000 ವನ್ನು ಸಾಮರ್ಥ್ಯ ವೃದ್ಧಿ, ಮಾನವ ಸಂಪನ್ಮೂಲ ನಿಯೋಜನೆ, |

| | | |
|---|---|---|
| | | ಪ್ರಮಾಣೀಕರಣ, ಪ್ರಚಾರ, ಮೌಲ್ಯವರ್ಧನೆ, ಬ್ರಾಂಡ್ ಅಭಿವೃದ್ಧಿ ಮತ್ತು ಮಾರುಕಟ್ಟೆಗಾಗಿ ವಿನಿಯೋಗಿಸಲಾಗುವುದು.<br>4. ಪ್ರತಿ ಫಲಾನುಭವಿಗೆ 2 ಹೆಕ್ಟೇರ್ ಗಳವರೆಗೆ ಸಹಾಯಧನ ನೀಡಲಾಗುವುದು.<br>5. 2020-21 ನೇ ಸಾಲಿನಲ್ಲಿ ಒಟ್ಟು ರೂ.264.92 ಲಕ್ಷಗಳನ್ನು ವಿನಿಯೋಗಿಸಲಾಗಿದೆ.<br>6. 2021-22 ನೇ ಸಾಲಿನಲ್ಲಿ ರೂ.30.89 ಕೋಟಿ ಮೊತ್ತದ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿ, ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದ್ದು ಅನುಮೋದನೆ ನಿರೀಕ್ಷಿಸಿ, ಕಾರ್ಯಕ್ರಮ ಅನುಷ್ಠಾನಕ್ಕೆ ಅಗತ್ಯವಾದ ಸಿದ್ಧತೆಗಳನ್ನು ಮಾಡಿಕೊಳ್ಳಲಾಗಿದೆ.<br>7. ತೋಟಗಾರಿಕೆ ಇಲಾಖೆಯ ಜೈವಿಕ ಕೇಂದ್ರಗಳಲ್ಲಿ ಎರೆಹುಳು ಗೊಬ್ಬರ, ಟ್ರೈಕೋಡರ್ಮ, ಸುಡೋಮೋನಾಸ್, ಅಜಟೋಬ್ಯಾಕ್ಟರ್, ಅಜೋಸ್ಪೈರಿಲಂ, ವ್ಯಾಮ್, ಅರ್ಕಮೈಕ್ರೋಬಿಯಲ್ ಕನ್ಸೋರ್ಷಿಯಂ ನಂತಹ ಜೈವಿಕ ಗೊಬ್ಬರಗಳು ಮತ್ತು ಜೈವಿಕ ನಿಯಂತ್ರಕಗಳನ್ನು ಉತ್ಪಾದಿಸಿ ರೈತರಿಗೆ ನೀಡಲಾಗುತ್ತಿದೆ. |

**No.HORTI 445 HGM 2021**

(ಮುನಿರತ್ನ)
ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ
ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.